ವಿಧಾನ ಪರಿಷತ್ತು ಚುಕ್ಕೆಯಿಲ್ಲದ 23/9/21

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1442 |
| ಸದಸ್ಯರ ಹೆಸರು | : | ಶ್ರೀ ಮೋಹನ್ ಕುಮಾರ್ ಕೊಂಡಜ್ಜಿ (ನಾಮ ನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | : | 23-09-2021 |

| ಕ್ರ.ಸಂ. | ಪ್ರಶ್ನೆಗಳು | ಉತ್ತರ |
|---|---|---|
| ಅ | 2020-2021 ಮತ್ತು 2021-2022 ನೇ ಸಾಲಿನಲ್ಲಿ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯು KTPP 2005 ರ ಅಧಿನಿಯಮ 4(G) ಅಡಿಯಲ್ಲಿ ವಿನಾಯಿತಿ ಪಡೆದು ಎಷ್ಟು ಕಾರ್ಯಗಳನ್ನು ನಿರ್ವಹಿಸಿದೆ; ಆರ್ಥಿಕ ಇಲಾಖೆಗೆ KTPP 2005 ರ ಅಧಿನಿಯಮ 4(G) ಅಡಿಯಲ್ಲಿ ವಿನಾಯಿತಿ ನೀಡುವಂತೆ ಕೋರಿ ಎಷ್ಟು ಮನವಿಗಳನ್ನು ಸಲ್ಲಿಸಲಾಗಿತ್ತು; ಎಷ್ಟು ಮನವಿಗಳನ್ನು ಪುರಸ್ಕರಿಸಲಾಗಿದೆ; KTPP 2005 ರ ಅಧಿನಿಯಮ 4(G) ಅಡಿಯಲ್ಲಿ ವಿನಾಯಿತಿ ಆದೇಶ ನೀಡಿದ/ಸಹಿ ಮಾಡಿದ ಅಧಿಕಾರಿ ಯಾರು; ಆದೇಶ ನೀಡಿದ್ದೇ ಆದರೆ, ವಾರ್ತಾ ಇಲಾಖೆಯ ಯಾವ ಶಾಖೆಗಳಲ್ಲಿ ಅನುಷ್ಠಾನ ಮಾಡಲಾಗಿದೆ; ಇದಕ್ಕೆ ಪಾವತಿಸಿರುವ ಮೊತ್ತವೆಷ್ಟು? (ವಿವರಗಳನ್ನು ನೀಡುವುದು). | ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯು 2020-2021 ಮತ್ತು 2021-2022 ನೇ ಸಾಲಿನಲ್ಲಿ KTPP 2005 ರ ಅಧಿನಿಯಮ 4(G) ಅಡಿಯಲ್ಲಿ ವಿನಾಯಿತಿ ಪಡೆದು ನಿರ್ವಹಿಸಿದ ಕಾರ್ಯಗಳ ವಿವರ, KTPP 2005 ರ ಅಧಿನಿಯಮ 4(G) ಅಡಿಯಲ್ಲಿ ವಿನಾಯಿತಿ ಆದೇಶ ನೀಡಿದ/ಸಹಿ ಮಾಡಿದ ಅಧಿಕಾರಿ ವಿವರ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯಲ್ಲಿ ಅನುಷ್ಠಾನ ಮಾಡಲಾದ ಶಾಖೆಗಳ ವಿವರ ಮತ್ತು ಪಾವತಿಸಿರುವ ಮೊತ್ತದ ವಿವರ ಇಂತಿದೆ :<br>**<u>ಕ್ಷೇತ್ರ ಪ್ರಚಾರ ಶಾಖಾ ವತಿಯಿಂದ :-</u>**<br>**<u>2020-21 ನೇ ಸಾಲಿನಲ್ಲಿ</u>** :<br>1) 2021 ರ ಜನವರಿ 26 ರಂದು ನವದೆಹಲಿಯ ಗಣರಾಜ್ಯೋತ್ಸವ ಪೆರೇಡ್ ನಲ್ಲಿ ಭಾಗವಹಿಸಿದ ಸ್ತಬ್ಧಚಿತ್ರ ನಿರ್ಮಾಣ ಕಾರ್ಯಕ್ಕೆ 4(G) ವಿನಾಯಿತಿ ಪಡೆಯಲಾಗಿದೆ. ರೂ.70.00 ಲಕ್ಷ (ತೆರಿಗೆ ಸೇರಿದಂತೆ) ಪಾವತಿಸಿದೆ.<br>ಸಹಿ ಮಾಡಿದ ಅಧಿಕಾರಿ : ಶ್ರೀಮತಿ ಕೆ.ಗಾಯಿತ್ರಿ, ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ<br>**<u>2021-22 ನೇ ಸಾಲಿನಲ್ಲಿ</u>**<br>1) ರಾಜ್ಯ ಸರ್ಕಾರದ ಸಾಧನೆಗಳು ಹಾಗೂ ವಿವಿಧ ಇಲಾಖೆಗಳಲ್ಲಿನ ಯೋಜನೆಗಳ ಮಾಹಿತಿಯನ್ನು Digital Media ಮೂಲಕ ಸಾಮಾಜಿಕ ಜಾಲತಾಣಗಳಾದ Face Book, You Tube, Instagram, Twitter ನಲ್ಲಿ ಪ್ರಚಾರ ಕಾರ್ಯಕ್ಕೆ 4 (G) ವಿನಾಯಿತಿ ಪಡೆಯಲಾಗಿದೆ. ವೆಚ್ಚ ರೂ. 4.85 ಕೋಟಿ (ತೆರಿಗೆ ಪ್ರತ್ಯೇಕ).<br>ಸಹಿ ಮಾಡಿದ ಅಧಿಕಾರಿ: ಶ್ರೀಮತಿ ಕೆ.ಗಾಯಿತ್ರಿ, ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ.<br>**<u>ವಾಣಿಜ್ಯ ಮತ್ತು ಪ್ರಚಾರ ಶಾಖಾ ವತಿಯಿಂದ :</u>**<br>**<u>2021-22 ನೇ ಸಾಲಿನಲ್ಲಿ</u>**<br>ಸರ್ಕಾರದ ಇಲಾಖೆಗಳ ಸಾಧನೆ ಕುರಿತು 120 ಮತ್ತು 90 ಸೆಕೆಂಡ್ ಅವಧಿಯ ಸರ್ಕಾರದ ವಲಯವಾರು/ |

| | | |
|---|---|---|
| | | ಕ್ಷೇತ್ರವಾರು/ಇಲಾಖಾವಾರು ಸಾಧನೆಗಳನ್ನು ಬಿಂಬಿಸುವ ಒಟ್ಟು 30 ಟಿ.ವಿ ಸ್ಪಾಟ್ಸ್ ಗಳನ್ನು ಮತ್ತು 31 ಜಿಲ್ಲೆಗಳಲ್ಲಿ ಸರ್ಕಾರದ ಸಾಧನೆಗಳನ್ನು ಬಿಂಬಿಸುವ 31 ಟಿ.ವಿ. ಸ್ಪಾಟ್ಸ್ ಗಳನ್ನು, ಒಟ್ಟಾರೆ 61 ಟಿ.ವಿ. ಸ್ಪಾಟ್ಸ್ ಗಳನ್ನು ಭಾರತದ ಸರ್ಕಾರದ ಅಂಗೀಕೃತ ದರದಂತೆ ನಿರ್ಮಿಸಲು KTTP 2005ರ 4 (G) ವಿನಾಯಿತಿ ಪಡೆಯಲಾಗಿದೆ. ವೆಚ್ಚ ರೂ. 6,59,76,750/-ಗಳು.<br>ಸಹಿ ಮಾಡಿದ ಅಧಿಕಾರಿ: ಶ್ರೀಮತಿ ಕೆ.ಗಾಯಿತ್ರಿ, ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ.<br>**<u>ಪ್ರಕಟಣಾ ಶಾಖಾ ವತಿಯಿಂದ :</u>**<br>**<u>2020-21 ನೇ ಸಾಲಿನಲ್ಲಿ :</u>**<br>1) ಕೋವಿಡ್ - 19 ಸಂಕಷ್ಟಕ್ಕೊಳಗಾದ ಸಮಾಜದ ವಿವಿಧ ವರ್ಗಗಳ ಜನರಿಗೆ ಅನುಕೂಲವಾಗುವಂತೆ ರೂಪಿಸಿರುವ ಪರಿಹಾರ ಕಾರ್ಯಕ್ರಮಗಳ ಕುರಿತು ರಾಜ್ಯಾದ್ಯಂತ ಇಲಾಖಾ ಒಡೆತನದ 1600 ಹೋರ್ಡಿಂಗ್ಸ್ ಗಳಲ್ಲಿ ಸರ್ಕಾರಿ ಸ್ವಾಮ್ಯದ ಮೆ: ಮಾರ್ಕೆಟಿಂಗ್ ಕಮ್ಯುನಿಕೇಷನ್ ಅಂಡ್ ಅಡ್ವರ್ಟೈಸಿಂಗ್ ಲಿಮಿಟೆಡ್ ಸಂಸ್ಥೆಯ ಮೂಲಕ ಪ್ರಚಾರ ಕಾರ್ಯಕ್ಕೆ 4 (ಜಿ) ವಿನಾಯಿತಿ ಪಡೆಯಲಾಗಿದೆ. ಪಾವತಿಸಿದ ಮೊತ್ತ ರೂ. 1,61,60,000/- (ಅನ್ವಯವಾಗುವ ತೆರಿಗೆ ಪ್ರತ್ಯೇಕ).<br>2) ಬೆಂಗಳೂರು ಮಿಷನ್ - 2022 ಕಾರ್ಯಕ್ರಮದ ಕುರಿತು ಬೆಂಗಳೂರು ಹೊರವಲಯದ 200 ಖಾಸಗಿ ಪ್ರಚಾರ ಫಲಕಗಳಲ್ಲಿ ಮೆ: ಮಾರ್ಕೆಟಿಂಗ್ ಕಮ್ಯುನಿಕೇಷನ್ ಅಂಡ್ ಅಡ್ವರ್ಟೈಸಿಂಗ್ ಲಿಮಿಟೆಡ್ ಸಂಸ್ಥೆಯ ಮೂಲಕ ಪ್ರಚಾರ ಕಾರ್ಯಕ್ಕೆ 4(ಜಿ) ವಿನಾಯಿತಿ ಪಡೆಯಲಾಗಿದೆ. ಪಾವತಿಸಿದ ಮೊತ್ತ ರೂ. 4,93,50,000/- (ಅನ್ವಯವಾಗುವ ತೆರಿಗೆ ಪ್ರತ್ಯೇಕ)<br>ಈ ಮೇಲಿನ ಎರಡೂ ಅಧಿಸೂಚನೆಗಳಿಗೆ ಸಹಿ ಮಾಡಿದ ಅಧಿಕಾರಿ: ಕೆ.ಗಾಯಿತ್ರಿ, ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ.<br>**<u>2021-22ನೇ ಸಾಲಿನಲ್ಲಿ</u>** - ಯಾವುದೇ 4 (ಜಿ) ವಿನಾಯಿತಿ ಮನವಿ ಸಲ್ಲಿಸಿರುವುದಿಲ್ಲ. |

ಕಸಿಇ-ಪಿಎಪಿ/268/2021

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ